## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 417

02. ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀಧರರ ಕ್ಷೇತ್ರ)

03. ಉತ್ತರಿಸುವ ದಿನಾಂಕ : 16.12.2021

04. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರೀಯ ಪೊಲೀಸ್ ಸುಧಾರಣಾ ಆಯೋಗ ನೀಡಿರುವ ಶಿಫಾರಸ್ಸಿಗೆ ಸಂಬಂಧಿಸಿದಂತೆ, ಘನ ಸರ್ವೋಚ್ಚ ನ್ಯಾಯಾಲಯ ನೀಡಿರುವ ಏಳು ಅಂಶಗಳ ನಿರ್ದೇಶನಗಳನ್ನು ಸರ್ಕಾರ ಸಂಪೂರ್ಣವಾಗಿ ಪರಿಪಾಲನೆ ಮಾಡಲಾಗಿದೆಯೇ; | ಮಾನ್ಯ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದನ್ವಯ, ಭಾರತ ಸರ್ಕಾರದ ಪತ್ರ ಸಂಖ್ಯೆ: 25019/18/2010 ಪಿಎಂ-II, ದಿ:12.02.2018ರಲ್ಲಿ ಕರ್ನಾಟಕ ಸರ್ಕಾರಕ್ಕೆ ಸಂಬಂಧಿಸಿದಂತೆ, 6 ಶಿಫಾರಸ್ಸುಗಳು ಇದ್ದು, ಅವುಗಳನ್ನು ಪರಿಪಾಲನೆ ಮಾಡಲಾಗಿರುತ್ತದೆ. |
| ಆ) | ಪೊಲೀಸ್ ಇಲಾಖೆಯಲ್ಲಿನ ಕ್ರಿಯಾತ್ಮಕ ನೇಮಕಾತಿ (Functional Post) ಹುದ್ದೆಗಳ ಅವಧಿಯನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯ ಸಾಮಾನ್ಯವಾಗಿ ಎರಡು ವರ್ಷಗಳ ಅವಧಿ ನಿಗಧಿಪಡಿಸಿದೆ. ಆದರೆ, ರಾಜ್ಯ ಸರ್ಕಾರ ಈ ವಿಷಯದಲ್ಲಿ ರಾಜ್ಯ ಪೊಲೀಸ್ ಕಾಯ್ದಿಗೆ ತಿದ್ದುಪಡಿ ತಂದು ಒಂದು ವರ್ಷಕ್ಕೆ ನಿಗಧಿ ಪಡಿಸಿರುತ್ತದೆ. ಇದರಿಂದಾಗಿ ಕ್ರಿಯಾತ್ಮಕ ನೇಮಕಾತಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿಗಳು ಪೂರ್ಣ ಪ್ರಮಾಣದಲ್ಲಿ ಪರಿಣಾಮಕಾರಿಯಾಗಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂಬ ಅಂಶ ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರದ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 74 ಶಾಸನ 2012, ಬೆಂಗಳೂರು ದಿ:18.06.2013ರಲ್ಲಿ ಕರ್ನಾಟಕ ಪೊಲೀಸ್ (ತಿದ್ದುಪಡಿ) ಕಾಯ್ದೆ 2013ಕ್ಕೆ ತಿದ್ದುಪಡಿ ಮಾಡಲಾಗಿದ್ದು, ಪೊಲೀಸ್ ಇಲಾಖೆಯಲ್ಲಿನ ಕಾರ್ಯಕಾರಿಣಿ ಮತ್ತು ಕಾರ್ಯಕಾರ್ಯೇತರ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳು ಕ್ರಿಯಾತ್ಮಕ ನೇಮಕಾತಿ (Functional Post) ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಲು ಅನುವಾಗುವಂತೆ ಮತ್ತು ಇವರು ಎಲ್ಲಾ ವಿಭಾಗಗಳಲ್ಲಿ ವೃತ್ತಿ ನೈಪುಣ್ಯತೆ / ಅನುಭವ ಪಡೆಯುವುದು ಅವಶ್ಯವಾಗಿರುವುದರಿಂದ ಸದರಿ ಹುದ್ದೆಗಳ ಅವಧಿಯನ್ನು ಒಂದು ವರ್ಷಕ್ಕೆ ನಿಗಧಿಗೊಳಿಸಲಾಗಿರುತ್ತದೆ. |
| ಇ) | ಬಂದಿದ್ದಲ್ಲಿ, ಸರ್ಕಾರವು ತೆಗೆದುಕೊಳ್ಳುವ ಕ್ರಮವೇನು? | |

HD/192/PPS/2021

(ಆರಗ ಜ್ಞಾನೇಂದ್ರ)
ಮಾನ್ಯ ಗೃಹ ಸಚಿವರು